# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : **813**
2. ಸದಸ್ಯರ ಹೆಸರು : ಶ್ರೀ ಕೆ.ಟಿ. ಶ್ರೀಕಂಠೇಗೌಡ
3. ಉತ್ತರಿಸುವ ದಿನಾಂಕ : **09.03.2021**
4. ಉತ್ತರಿಸುವ ಸಚಿವರು : ಮಾನ್ಯ ಪೌರಾಡಳಿತ ಹಾಗೂ ಸಕ್ಕರೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಮೈಸೂರು ಸಕ್ಕರೆ ಕಂಪನಿಯು ಯಾವ ವರ್ಷದಿಂದ ಕಬ್ಬು ಅರೆಯುವುದನ್ನು ಸ್ಥಗಿತಗೊಳಿಸಿದೆ: | 2015-16 ಮತ್ತು 2016-17ನೇ ಹಂಗಾಮುಗಳಲ್ಲಿ ಕಬ್ಬು ನುರಿಸುವಿಕೆಯನ್ನು ಸ್ಥಗಿತಗೊಳಿಸಿದ್ದು, 2017-18 ಮತ್ತು 2018-19ನೇ ಹಂಗಾಮುಗಳಲ್ಲಿ ಕಬ್ಬು ನುರಿಸಲಾಗಿದೆ. ಮುಂದುವರೆದು 2019-20ನೇ ಹಂಗಾಮಿನಿಂದ ಕಬ್ಬು ನುರಿಸುವಿಕೆಯನ್ನು ಸ್ಥಗಿತಗೊಳಿಸಲಾಗಿದೆ. |
| (ಆ) | ಸದರಿ ಕಾರ್ಖಾನೆ ಸ್ಥಗಿತಗೊಂಡಿರುವುದರಿಂದ, ಮಂಡ್ಯ ಜಿಲ್ಲೆಯ ಕಬ್ಬು ಬೆಳೆಗಾರರಿಗೆ ಸಂಕಷ್ಟ ಎದುರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಬಂದಿದೆ.<br><br>ಮೈಸೂರು ಸಕ್ಕರೆ ಕಾರ್ಖಾನೆಯಲ್ಲಿ ಕಬ್ಬು ನುರಿಸುವಿಕೆಯನ್ನು ಸ್ಥಗಿತಗೊಳಿಸಿದ ಹಂಗಾಮುಗಳಲ್ಲಿ ಮೈಸೂರು ಸಕ್ಕರೆ ಕಾರ್ಖಾನೆಯ ಮೀಸಲು ಕ್ಷೇತ್ರದಲ್ಲಿ ಬೆಳೆದ ಕಬ್ಬನ್ನು ನೆರೆಯ ಸಕ್ಕರೆ ಕಾರ್ಖಾನೆಗಳಿಗೆ ಪೂರೈಕೆ ಮಾಡಲು ವ್ಯವಸ್ಥೆಯನ್ನು ಮಾಡಲಾಗಿರುತ್ತದೆ. |
| (ಇ) | ಬಂದಿದ್ದಲ್ಲಿ, ಈ ಕಾರ್ಖಾನೆಯನ್ನು ಯಾವಾಗ ಆರಂಭಿಸಲಾಗುವುದು: ಹಾಗೂ ಸರ್ಕಾರಿ ಸ್ವಾಮ್ಯದಲ್ಲೇ ಈ ಕಾರ್ಖಾನೆಯನ್ನು ಮುಂದುವರೆಸಲು ಸರ್ಕಾರ ಆಲೋಚಿಸಬಾರದೇಕೆ (ವಿವರ ನೀಡುವುದು) | ಮೈಸೂರು ಸಕ್ಕರೆ ಕಾರ್ಖಾನೆಯನ್ನು LROT (Lease Rehabilitate Operate Transfer) ಆಧಾರದ ಮೇಲೆ "ಇದ್ದಲ್ಲಿ ಇದ್ದಂತೆಯೆ" (As is where is basis ) 40 ವರ್ಷಗಳ ಅವಧಿಗೆ ಖಾಸಗಿಯವರಿಗೆ ಗುತ್ತಿಗೆ ನೀಡಿ ಪುನಶ್ಚೇತನಗೊಳಿಸಲು ಸರ್ಕಾರದ ಆದೇಶ ಸಂಖ್ಯೆ: ಸಿಐ 5 ಸಿಓಎಫ್ 2020 ದಿನಾಂಕ:18.11.2020ರಲ್ಲಿ ಅನುಮತಿಸಲಾಗಿದೆ. ಈ ಸಂಬಂಧ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮಗಳು 2000ರಲ್ಲಿ ನಿಯಮಿಸಿರುವಂತೆ ಟೆಂಡರ್ ಕರೆಯಲು ಟೆಂಡರ್ ಡಾಕ್ಯುಮೆಂಟ್ ಮತ್ತು ಒಡಂಬಡಿಕೆ ಪತ್ರಗಳನ್ನು ಸಿದ್ಧಪಡಿಸಲಾಗುತ್ತಿದ್ದು, ಯಶಸ್ವಿ ಬಿಡ್ದುದಾರರು 2021-22ನೇ ಹಂಗಾಮಿನಿಂದ ಮೈಸೂರು ಸಕ್ಕರೆ ಕಾರ್ಖಾನೆಯಲ್ಲಿ ಕಬ್ಬು ನುರಿಸುವ ಕಾರ್ಯವನ್ನು ಪ್ರಾರಂಭಿಸುವಂತೆ ಷರತ್ತು ವಿಧಿಸಲಾಗುತ್ತಿದೆ.<br>ಮೈಸೂರು ಸಕ್ಕರೆ ಕಾರ್ಖಾನೆಯನ್ನು LROT (Lease Rehabilitate Operate Transfer) ಆಧಾರದ ಮೇಲೆ "ಇದ್ದಲ್ಲಿ ಇದ್ದಂತೆಯೆ" (As is where is basis) ಖಾಸಗಿಯವರಿಗೆ ಗುತ್ತಿಗೆ ನೀಡಿ ಪುನಶ್ಚೇತನಗೊಳಿಸಲು ಸರ್ಕಾರವು ತೀರ್ಮಾನಿಸಿರುವುದರಿಂದ ಸರ್ಕಾರಿ ಸ್ವಾಮ್ಯದಲ್ಲೇ ಈ ಕಾರ್ಖಾನೆಯನ್ನು ಮುಂದುವರೆಸುವ ಪ್ರಶ್ನೆ ಉದ್ಭವಿಸುವುದಿಲ್ಲ. |

| | | |
|---|---|---|
| (ಈ) | ಸ್ವಯಂ ನಿವೃತ್ತಿ ಪಡೆಯದೆ ಉಳಿದಿರುವ ನೌಕರರಿಗೆ ವಿವಿಧ ನಿಗಮ/ಮಂಡಳಿಗಳಿಗೆ ನೇಮಕಾತಿ ಮಾಡಲು ಸರ್ಕಾರ ಮುಂದಾಗಬಾರದೇಕೆ; | ಮೈಸೂರು ಸಕ್ಕರೆ ಕಂಪನಿಯು ಸತತವಾಗಿ ಅನುಭವಿಸಿದ ನಷ್ಟದಿಂದಾಗಿ ಕಾರ್ಮಿಕರಿಗೆ ನಿಯಮಿತವಾಗಿ ವೇತನ ಮತ್ತು ಭತ್ಯೆಗಳನ್ನು ಪಾವತಿಸಲು ಆರ್ಥಿಕ ಸಂಕಷ್ಟ ಉಂಟಾದ ಹಿನ್ನೆಲೆಯಲ್ಲಿ ಅಭಿಮತ ವ್ಯಕ್ತಪಡಿಸಿದ ನೌಕರರಿಗೆ ಸ್ವಯಂ ನಿವೃತ್ತಿ. ಯೋಜನೆಯನ್ನು ಜಾರಿಗೊಳಿಸುವುದಕ್ಕಾಗಿ 2020-21ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ : ಮೈಸೂರು ಸಕ್ಕರೆ ಕಾರ್ಖಾನೆಗೆ ಸಾಲಗಳು-6860-04-190-2-01ರಲ್ಲಿ ರೂ.21.80 ಕೋಟಿಗಳನ್ನು ಹಂಚಿಕೆ ಮಾಡಿದ್ದು, ಸದರಿ ಮೊತ್ತವನ್ನು ಸರ್ಕಾರದ ಆದೇಶ ಸಂಖ್ಯೆ:ಸಿಐ 05 ಸಿಒಎಫ್ 2020 ದಿನಾಂಕ:15.06.2020ರಲ್ಲಿ ಬಿಡುಗಡೆಗೊಳಿಸಲಾಗಿತ್ತು.<br>ಅದರಂತೆ ಸ್ವಯಂ ನಿವೃತ್ತಿ ಯೋಜನೆಗೆ ಸಹಮತ ನೀಡಿ ಅರ್ಜಿ ಸಲ್ಲಿಸಿದ 222 ನೌಕರರಿಗೆ ಸ್ವಯಂ ನಿವೃತ್ತಿ ಸೌಲಭ್ಯಗಳನ್ನು ಮಂಜೂರು ಮಾಡಿ ಮೈಸೂರು ಸಕ್ಕರೆ ಕಂಪನಿಯ ಸೇವೆಯಿಂದ ಬಿಡುಗಡೆಗೊಳಿಸಲಾಗಿದೆ ಮತ್ತು 24 ಜನ ನೌಕರರು ವಯೋನಿವೃತ್ತಿ ಹೊಂದಿರುತ್ತಾರೆ.<br>ಪ್ರಸ್ತುತ ಮೈಸೂರು ಸಕ್ಕರೆ ಕಂಪನಿಯಲ್ಲಿ 39 ನೌಕರರು ಮಾತ್ರ ಸೇವೆಯಲ್ಲಿ ಉಳಿದಿರುತ್ತಾರೆ. ಮೈಸೂರು ಸಕ್ಕರೆ ಕಾರ್ಖಾನೆಯನ್ನು LROT (Lease Rehabilitate Operate Transfer) ಆಧಾರದ ಮೇಲೆ "ಖಾಸಗಿಯವರಿಗೆ ಗುತ್ತಿಗೆ ನೀಡುತ್ತಿರುವುದರಿಂದ ಉಳಿದಿರುವ 39 ಖಾಯಂ ನೌಕರರಿಗೂ ಸಹ ಸ್ವಯಂ ನಿವೃತ್ತಿ ಯೋಜನೆಯನ್ನು ಮಂಜೂರು ಮಾಡಲು ಅಥವಾ ಸದರಿ ನೌಕರರನ್ನು ಮೈಸೂರು ಸಕ್ಕರೆ ಕಂಪನಿಯ ಸೇವೆಯಿಂದ ಬಿಡುಗಡೆಗೊಳಿಸಲು ಪರಿಶೀಲಿಸುತ್ತಿರುವುದರಿಂದ ಹಾಗೂ ಮೈಸೂರು ಸಕ್ಕರೆ ಕಂಪನಿಯಲ್ಲಿನ 285 ಖಾಯಂ ನೌಕರರ ಪೈಕಿ 222 ನೌಕರರಿಗೆ ಈಗಾಗಲೇ ಸ್ವಯಂ ನಿವೃತ್ತಿಯನ್ನು ಮಂಜೂರು ಮಾಡಿರುವುದರಿಂದ ಈ ಹಂತದಲ್ಲಿ ಉಳಿದ 39 ನೌಕರರನ್ನು ರಾಜ್ಯ ಸರ್ಕಾರದ ವಿವಿಧ ನಿಗಮ/ಮಂಡಳಿಗಳಿಗೆ ವಿಲೀನ ಮಾಡುವ ಪ್ರಶ್ನೆ ಉದ್ಭವಿಸುವುದಿಲ್ಲ. |
| (ಉ) | ಭದ್ರಾವತಿಯ ಮೈಸೂರು ಪೇಪರ್ ಮಿಲ್ ಕಾರ್ಮಿಕರ ಮಾದರಿಯಲ್ಲಿ ಈ ನೌಕರರನ್ನು ಸಹ ಇತರೆ ನಿಗಮಗಳಲ್ಲಿ ವಿಲೀನ ಮಾಡಬಾರದೇಕೆ? | |

ಸಂಖ್ಯೆ: ಸಿಐ 20 ಎಸ್‌ಜಿಎಫ್ 2021

(ಎನ್. ನಾಗರಾಜು.ಎಂ.ಟಿ.ಬಿ.)
ಪೌರಾಡಳಿತ ಮತ್ತು ಸಕ್ಕರೆ ಸಚಿವರು.